## ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 617
2. ಸದಸ್ಯರ ಹೆಸರು : ಶ್ರೀ ಅಲ್ಲಂ ವೀರಭದ್ರಪ್ಪ (ವಿಧಾನಸಭೆಯಿಂದ ಚುನಾಯಿತರಾದವರು)
3. ಉತ್ತರಿಸುವ ದಿನಾಂಕ : 24-09-2020
4. ಉತ್ತರಿಸುವವರು : ಮಾನ್ಯ ಮುಖ್ಯಮಂತ್ರಿಗಳು

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| ಅ) | ಬೆಂಗಳೂರಿನಲ್ಲಿ ಈವರೆಗೆ ಅಂದರೆ 90 ದಿನಗಳು ನಿರಂತರವಾಗಿ ಮಳೆ ಬಂದಿರುವ ವಿಷಯ ಸರ್ಕಾರದ ಗಮನಕ್ಕೆ ಬಂದಿದೆಯೇ; | ಸರ್ಕಾರದ ಗಮನಕ್ಕೆ ಬಂದಿರುತ್ತದೆ. |
| ಆ) | ಬಿಬಿಎಂಪಿ ಮತ್ತು ಸರ್ಕಾರ ಮಳೆನೀರನ್ನು ಸಂಗ್ರಹಿಸಲು ಈವರೆಗೆ ಯಾವ ಯೋಜನೆಯನ್ನೂ ರೂಪಿಸದಿರುವುದು ನಿಜವೇ | ಬಿಬಿಎಂಪಿ ಮತ್ತು ಸರ್ಕಾರ ಮಳೆನೀರನ್ನು ಸಂಗ್ರಹಿಸಲು ಹಲವಾರು ಕ್ರಮಗಳನ್ನು ಕೈಗೊಳ್ಳಲಾಗಿದೆ. ಇವುಗಳಲ್ಲಿ ಪ್ರಮುಖವಾಗಿ ಮಳೆ ನೀರು ಕೊಯ್ಲು ಪದ್ಧತಿಯನ್ನು ಅಳವಡಿಸಿಕೊಳ್ಳಲಾಗುತ್ತಿದ್ದು, ರಾಜಕಾಲುವೆಯ ತಳಭಾಗವನ್ನು ಕಾಂಕ್ರೀಟ್‌ನಿಂದ ಮುಚ್ಚದೇ ಮಣ್ಣಿನ ಪದರವನ್ನು ಉಳಿಸಿಕೊಳ್ಳುವುದು ಮತ್ತು ಹಾಲಿ ಇರುವ ಕಾಂಕ್ರೀಟ್ ನೆಲಹಾಸಿನಲ್ಲಿ ದೊಡ್ಡಗಾತ್ರದ ರಂಧ್ರವನ್ನು ಕೊರೆದು ಅಂತರ್‌ಜಲ ಹೆಚ್ಚಿಸಲು ಯೋಜನೆಯನ್ನು ರೂಪಿಸಲಾಗಿರುತ್ತದೆ.<br><br>ಮುಂದುವರೆದಂತೆ, ಪಾಲಿಕೆಯ ಕಟ್ಟಡ ಉಪವಿಧಿಗಳು–2003 ನಿಯಮ 32ರನ್ವಯ ಮತ್ತು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ಪರಿಷ್ಕೃತ ಮಾಸ್ಟರ್ ಪ್ಲಾನ್–2015ರ ವಲಯ ನಿಯಮಾವಳಿ ಉಪವಿಧಿ 3.16 (xiii) ರಂತೆ 240 ಚ.ಮೀ. ಗಿಂತ ಹೆಚ್ಚಿರುವ ನಿವೇಶನದ ವಿಸ್ತೀರ್ಣಕ್ಕೆ ಕಟ್ಟಡ ನಕ್ಷೆ ಮಂಜೂರಾತಿ ನೀಡುವ ಸಮಯದಲ್ಲಿ ಅಗತ್ಯ ಮಳೆ ನೀರು ಸಂಗ್ರಹಣಾ ವ್ಯವಸ್ಥೆಯನ್ನು ಸ್ವತ್ತಿನಲ್ಲಿ ನಿರ್ಮಿಸಲು ಮಂಜೂರಾತಿ ಕೋರುವ ನಕ್ಷೆಯಲ್ಲಿ ಅಳವಡಿಸಲಾಗುತ್ತಿದೆ. ತದನಂತರ ಮಳೆ ನೀರು ಸಂಗ್ರಹಣಾ ವ್ಯವಸ್ಥೆಯನ್ನು |

. . .2/--

| | | |
|---|---|---|
| | | ನಿರ್ಮಿಸಲಾಗಿರುವುದನ್ನು ಖಾತ್ರಿಪಡಿಸಿಕೊಂಡ ನಂತರವೇ ಸ್ವಾಧೀನಾನುಭವ ಪತ್ರವನ್ನು ನೀಡಲಾಗುತ್ತಿರುತ್ತದೆ.<br><br>ಬೆಂಗಳೂರು ನಗರದಲ್ಲಿರುವ ಕಟ್ಟಡಗಳಿಗೆ ಮಳೆ ನೀರು ಕೊಯ್ಲು ಪದ್ಧತಿ ಅಳವಡಿಸಿಕೊಳ್ಳಲು ಬಿ.ಬಿ.ಎಂ.ಪಿ. ವ್ಯಾಪ್ತಿಯಲ್ಲಿ ಬರುವ 60'x40' ಚದರ ಅಡಿ ಹಾಗೂ ಅದಕ್ಕಿಂತ ಮೇಲ್ಪಟ್ಟು ವಿಸ್ತೀರ್ಣವುಳ್ಳ ನಿವೇಶನದಲ್ಲಿ ಈಗಾಗಲೇ ಕಟ್ಟಡವನ್ನು ನಿರ್ಮಿಸಿದವರಿಗೆ ಮತ್ತು ಹೊಸದಾಗಿ ಕಟ್ಟಡವನ್ನು 30'x40' ಮತ್ತು ಹಾಗೂ ಅದಕ್ಕಿಂತ ಮೇಲ್ಪಟ್ಟು ವಿಸ್ತೀರ್ಣದಲ್ಲಿ ನಿರ್ಮಿಸಿದ್ದರೆ ಕಡ್ಡಾಯವಾಗಿ ಮಳೆ ನೀರು ಕೊಯ್ಲು ಅಳವಡಿಸಬೇಕೆಂದು ಬೆಂಗಳೂರು ಮಂಡಳಿ ಕಾಯ್ದೆ ಸೆಕ್ಷನ್ 72(ಎ) ಗೆ ಆಗಸ್ಟ್ 2009ರಲ್ಲಿ ತಿದ್ದುಪಡಿ ತರಲಾಗಿರುತ್ತದೆ. ಈ ಪದ್ಧತಿಯನ್ನು ಅಳವಡಿಸಿಕೊಳ್ಳದೆ ಇರುವ ಕಟ್ಟಡಗಳಿಗೆ ಮಾಹೆಯಾನ ಬಿಲ್ಲಿನಲ್ಲಿ ಹೆಚ್ಚುವರಿಯಾಗಿ ದಂಡವನ್ನು ವಿಧಿಸಲಾಗುತ್ತಿರುತ್ತದೆ.<br><br>**ಮಳೆ ನೀರು ಕೊಯ್ಲು ಪದ್ಧತಿ ಅಳವಡಿಕೆ ಮತ್ತು ನೀರಿನ ಸಂರಕ್ಷಣೆ ಬಗ್ಗೆ ಅರಿವು ಮೂಡಿಸುವುದು**<br><br>ಮಳೆ ನೀರು ಕೊಯ್ಲು ಪದ್ದತಿಯನ್ನು ಅಳವಡಿಸಿಕೊಳ್ಳಲು ಸಾರ್ವಜನಿಕರಿಗೆ ಎಲ್ಲಾ ತಾಂತ್ರಿಕ ಮಾಹಿತಿಯನ್ನು ನೀಡುವ ಸಲುವಾಗಿ ಸರ್.ಎಂ.ವಿಶ್ವೇಶ್ವರಯ್ಯ ಮಳೆನೀರು ಸುಗ್ಗಿ ಕೇಂದ್ರ ಮತ್ತು ಸಹಾಯವಾಣಿಯನ್ನು ದಿನಾಂಕ: 21/03/2011 ರಂದು ಪ್ರಾರಂಭಿಸಲಾಗಿದ್ದು, ಸದರಿ ಕೇಂದ್ರಕ್ಕೆ ಬರುವ ಸಾರ್ವಜನಿಕರಿಗೆ ನುರಿತ ಅಭಿಯಂತರರಿಂದ ಮಳೆ ನೀರು ಕೊಯ್ಲು ಹಾಗೂ ನೀರಿನ ಮಿತ ಬಳಕೆ ಬಗ್ಗೆ ನಿರಂತರವಾಗಿ ಮಾಹಿತಿಯನ್ನು ನೀಡಲಾಗುತ್ತಿರುತ್ತದೆ. ಈ ಕೇಂದ್ರದಲ್ಲಿ 26 ಬಗೆಯ ಮಳೆ ನೀರು ಕೊಯ್ಲು ಪದ್ದತಿಯ ಮಾದರಿಗಳನ್ನು ಅಳವಡಿಸಲಾಗಿದೆ. ಸುಗ್ಗಿ ಕೇಂದ್ರದ |

| | | |
|---|---|---|
| | | ಆವರಣದಲ್ಲಿ ನೀರಿನ ಸದ್ಬಳಕೆ ಮಹತ್ವ ಮತ್ತು ಸಂಸ್ಕರಿಸಿದ ತ್ಯಾಜ್ಯನೀರನ್ನು ಮರು ಬಳಕೆ ಮಾಡುವ ಬಗ್ಗೆ ಮಾಹಿತಿಯನ್ನು ನಿರಂತರವಾಗಿ ನೀಡಲಾಗುತ್ತಿರುತ್ತದೆ. ಈ ಕೇಂದ್ರದ ಮೊದಲನೆಯ ಮಹಡಿಯಲ್ಲಿ 72 ಆಸನಗಳುಳ್ಳ ಸಭಾಂಗಣವಿದ್ದು, ಇದರಲ್ಲಿ ಪ್ರಮುಖವಾಗಿ ಸಾರ್ವಜನಿಕರು, ಶಾಲಾ ಮಕ್ಕಳು, ಗಣ್ಯರು, ರಾಜ್ಯ ಮತ್ತು ಅಂತರರಾಜ್ಯ ಹಾಗೂ ವಿದೇಶಗಳಿಂದ ಮತ್ತು ಸಂಘ ಸಂಸ್ಥೆಗಳಿಂದಲೂ ಬರುವವರಿಗೆ ಮಳೆನೀರು ಕೊಯ್ಲಿನ ಬಗ್ಗೆ ಮತ್ತು ನೀರಿನ ಸದ್ಬಳಕೆ ಮಹತ್ವದ ಬಗ್ಗೆ ಕಿರುಚಿತ್ರದ ಮುಖಾಂತರ ಮಾಹಿತಿಯನ್ನು ನೀಡಲಾಗುತ್ತಿರುತ್ತದೆ.<br><br>ಇದರ ಜೊತೆಗೆ ಮಳೆನೀರು ಕೊಯ್ಲು ಪದ್ಧತಿಯನ್ನು ಅಳವಡಿಸಿಕೊಳ್ಳಲು ಸಾರ್ವಜನಿಕರಿಗೆ ಎಲ್ಲಾ ಮಾಹಿತಿಯನ್ನು ತಲುಪಿಸುವ ನಿಟ್ಟಿನಲ್ಲಿ ಕರ್ನಾಟಕ ರಾಜ್ಯ ವಿಜ್ಞಾನ ಮತ್ತು ತಂತ್ರಜ್ಞಾನ ಸಂಸ್ಥೆಯ (ಭಾರತೀಯ ವಿಜ್ಞಾನ ಮಂದಿರ ಆವರಣದಲ್ಲಿದ್ದು) ವತಿಯಿಂದ ಮಳೆನೀರು ಕೊಯ್ಲು ಪದ್ಧತಿಯನ್ನು ಅಳವಡಿಸಲು ಎಲ್ಲಾ ತಾಂತ್ರಿಕ ಮಾಹಿತಿಯನ್ನು ಸಾರ್ವಜನಿಕರಿಗೆ ನೀಡುವ ಸಲುವಾಗಿ ಸಹಾಯವಾಣಿಯನ್ನು ಸ್ಥಾಪಿಸಲಾಗಿರುತ್ತದೆ.<br><br>ಜಲಮಂಡಳಿಯು ಮಳೆನೀರು ಕೊಯ್ಲು ಪದ್ಧತಿಯ ಬಗ್ಗೆ ಬೆಂಗಳೂರಿನಾದ್ಯಾಂತ ಆಯಾ ಪ್ರದೇಶದ ಶಾಸಕರು, ಚುನಾಯಿತ ಪ್ರತಿನಿಧಿಗಳು ಮತ್ತು ಸಾರ್ವಜನಿಕರ ಸಹಕಾರದೊಂದಿಗೆ ಸುಮಾರು 40 ಸ್ಥಳಗಳಲ್ಲಿ ಜಾಗೃತಿ ಕಾರ್ಯಕ್ರಮವನ್ನು ಹಮ್ಮಿಕೊಂಡು ನುರಿತ ತಜ್ಞರೊಂದಿಗೆ ಮಾಹಿತಿಯನ್ನು ನೀಡುವುದರ ಜೊತೆಗೆ ಇದಕ್ಕೆ ಸಂಬಂಧಪಟ್ಟ ಭಿತ್ತಿ ಪತ್ರಗಳನ್ನು ಸಹ ವಿತರಿಸಿ ಸಾರ್ವಜನಿಕರಿಗೆ ಮಾಹಿತಿಯನ್ನು ನೀಡಲಾಗಿದೆ. ಜಾಗೃತಿ ಕಾರ್ಯಕ್ರಮದಲ್ಲಿ ಸ್ಥಳೀಯ ಶಾಸಕರು ಮತ್ತು ಮಹಾನಗರ ಪಾಲಿಕೆಯ ಚುನಾಯಿತ ಸದಸ್ಯರುಗಳು ಸಹ ಉತ್ಸಾಹದಿಂದ ಭಾಗವಹಿಸಿ ಕಾರ್ಯಕ್ರಮವನ್ನು ಯಶಸ್ವಿಗೊಳಿಸಿದ್ದಾರೆ. |

| | | |
|---|---|---|
| | | ಜಾಗೃತಿ ಕಾರ್ಯಕ್ರಮದ ಜೊತೆ ಜೊತೆಗೆ ಮುಂಜಾನೆ ಬಹುಮುಖ್ಯವಾದ ಉದ್ಯಾನವನಗಳಲ್ಲಿ ವಾಯು ವಿಹಾರಕ್ಕೆ ಬರುವ ಸಾರ್ವಜನಿಕರಿಗೆ ಮಳೆನೀರು ಕೊಯ್ಲು ಪದ್ಧತಿಯ ಮಾಹಿತಿಯನ್ನು ತಲುಪಿಸಲು ಅಭಿಯಾನ ಕಾರ್ಯಕ್ರಮವನ್ನು ಹಮ್ಮಿಕೊಂಡು ಜನರಿಗೆ ಮಾಹಿತಿಯನ್ನು ತಲುಪಿಸುವಲ್ಲಿ ಯಶಸ್ವಿಯಾಗಿದೆ. ಜಾಗೃತಿ ಹಾಗೂ ಅಭಿಯಾನ ಕಾರ್ಯಕ್ರಮದಲ್ಲಿ ಮಳೆನೀರು ಕೊಯ್ಲುವಿನ ಬಗ್ಗೆ "ಅಭಿನಯ ತರಂಗ" ಸಂಸ್ಥೆಯಿಂದ ಬೀದಿನಾಟಕವನ್ನು ಸಹ ಆಯೋಜಿಸಲಾಗಿರುತ್ತದೆ. ಮುಂದುವರೆದಂತೆ, "ನೀರು ಉಳಿಸಿ- ಬೆಂಗಳೂರು ಉಳಿಸಿ" ಅಭಿಯಾನದ ಅಂಗವಾಗಿ ವಿವಿಧ ಸರ್ಕಾರೇತರ ಸಂಘಗಳ ಸಹಯೋಗದೊಂದಿಗೆ ಜಾಗೃತಿ ಕಾರ್ಯಕ್ರಮಗಳನ್ನು ಆಯೋಜಿಸಲಾಗಿರುತ್ತದೆ.<br><br>ಮಳೆನೀರು ಕೊಯ್ಲು ಅಳವಡಿಕೆಗೆ ಪ್ಲಂಬರ್‌ಗಳ ಪಾತ್ರ ಪ್ರಮುಖವಾಗಿರುವುದರಿಂದ ಕರ್ನಾಟಕ ರಾಜ್ಯ ವಿಜ್ಞಾನ ಮತ್ತು ತಂತ್ರಜ್ಞಾನ ಸಂಸ್ಥೆಯು ಭಾರತೀಯ ವಿಜ್ಞಾನ ಮಂದಿರ ಆವರಣದಲ್ಲಿ ತರಬೇತಿ ಕಾರ್ಯಕ್ರಮವನ್ನು ದಿನಾಂಕ: 29/10/2009 ರಂದು ಉಚಿತವಾಗಿ ನೀಡಲು ಪ್ರಾರಂಭಿಸಿ, ಈ ತರಬೇತಿ ಕಾರ್ಯಕ್ರಮವು ನಿರಂತರವಾಗಿ ಈಗಲೂ ಸಹ ನಡೆಯುತ್ತಿದ್ದು, ಇದುವರೆಗೆ 74 ತರಬೇತಿ ಕಾರ್ಯಕ್ರಮಗಳನ್ನು ನೀಡಿದ್ದು, ಇದರಿಂದ 1830 ಪ್ಲಂಬರ್‌ಗಳಿಗೆ ತರಬೇತಿಯನ್ನು ನೀಡಲಾಗಿದೆ. ಸಾರ್ವಜನಿಕರು ಮಳೆನೀರು ಕೊಯ್ಲು ಅಳವಡಿಸಿಕೊಳ್ಳಲು ತರಬೇತಿ ಹೊಂದಿದ ಪ್ಲಂಬರ್‌ಗಳ ಸೇವೆಯನ್ನು ಒದಗಿಸಿಕೊಳ್ಳಲು ಬೆಂಗಳೂರು ಜಲಮಂಡಳಿಯ ಜಾಲತಾಣದಲ್ಲಿ ಪ್ಲಂಬರ್‌ಗಳ ವಿವರಗಳನ್ನು ನೀಡಲಾಗಿದೆ.<br><br>ಸರ್.ಎಂ.ವಿಶ್ವೇಶ್ವರಯ್ಯ ಮಳೆನೀರು ಸುಗ್ಗಿ ಕೇಂದ್ರದಿಂದ ಬೆಂಗಳೂರು ಜಲ ಮಂಡಳಿಯು ಮಳೆನೀರು ಕೊಯ್ಲು ಪದ್ಧತಿಯ ಬಗ್ಗೆ ಮಾಹಿತಿಯನ್ನು ಸಾರ್ವಜನಿಕರಿಗೆ ತಲುಪಿಸುವಲ್ಲಿ ಯಶಸ್ವಿಯಾಗಿದೆಯೆಂದು ಅರಿತು ಮಾರ್ಚ್-2014 ರಲ್ಲಿ ರಾಷ್ಟ್ರೀಯ ನಗರ ಪ್ರಶಸ್ತಿಯನ್ನು ನೀಡಲಾಗಿರುತ್ತದೆ. |

| | | |
|---|---|---|
| ಇ) | ಮುಂದಿನ ವರ್ಷವಾದರೂ ಯೋಜನೆ ರೂಪಿಸಿ ನೀರನ್ನು ಸಂಗ್ರಹಿಸಲು ಯೋಜಿಸಲಾಗಿದೆಯೇ; | ಪ್ರಸ್ತುತ ಮಳೆ ನೀರನ್ನು ಸಂಗ್ರಹಿಸಲು ಈಗಾಗಲೇ ಹಲವಾರು ಕ್ರಮಗಳನ್ನು ಕೈಗೊಳ್ಳಲಾಗಿದ್ದು, ಮುಂದಿನ ವರ್ಷಗಳಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಕ್ರಮಗಳನ್ನು ಕೈಗೊಳ್ಳಲು ಯೋಜಿಸಲಾಗಿದೆ. |
| ಈ) | ಇದನ್ನು ಪ್ರತಿಯೊಂದು ಹಳ್ಳಿ ಮತ್ತು ಪಟ್ಟಣಗಳಲ್ಲಿ ಮಾಡಲು ಸರ್ಕಾರ ಯೋಜನೆ ರೂಪಿಸಲು ಯೋಜಿಸಿದೆಯೇ; ಹಾಗಿದ್ದಲ್ಲಿ ಯಾವ ರೀತಿಯ ಕ್ರಮ ಕೈಗೊಳ್ಳಲಾಗಿದೆ? | ಬೆಂಗಳೂರು ನಗರದಲ್ಲಿ ಪ್ರಮುಖವಾಗಿ ಮಳೆ ಕೋಯ್ಲು ಪದ್ಧತಿಯನ್ನು ಅಳವಡಿಸಿಕೊಳ್ಳಲಾಗುತ್ತಿದ್ದು, ರಾಜಕಾಲುವೆಯ ತಳಭಾಗವನ್ನು ಕಾಂಕ್ರೀಟ್‌ನಿಂದ ಮುಚ್ಚದೇ ಮಣ್ಣಿನ ಪದರವನ್ನು ಉಳಿಸಿಕೊಳ್ಳುವುದು ಮತ್ತು ಹಾಲಿ ಇರುವ ಕಾಂಕ್ರೀಟ್ ನೆಲಹಾಸಿನಲ್ಲಿ ದೊಡ್ಡಗಾತ್ರದ ರಂಧ್ರವನ್ನು ಕೊರೆದು ಅಂತರ ಜಲ ಹೆಚ್ಚಿಸಲು ಯೋಜನೆಯನ್ನು ರೂಪಿಸಲಾಗಿರುತ್ತದೆ. ಪ್ರಸ್ತುತ ಮಳೆ ನೀರನ್ನು ಸಂಗ್ರಹಿಸಲು ಹಲವಾರು ಕ್ರಮಗಳನ್ನು ಕೈಗೊಳ್ಳಲಾಗಿದ್ದು, ಮುಂದಿನ ವರ್ಷ ಹೆಚ್ಚಿನ ಪ್ರಮಾಣದಲ್ಲಿ ವಿಸ್ತರಿಸಲು ಯೋಜಿಸಲಾಗಿದೆ.<br><br>ಸರ್ಕಾರವು ರಚಿಸಿರುವ ಕರ್ನಾಟಕ ಮುನಿಸಿಪಾಲಿಟಿ ಮಾದರಿ ಕಟ್ಟಡಗಳ ಉಪವಿಧಿಗಳು 2017 ಹಾಗು ಕರ್ನಾಟಕ ಕಾರ್ಪೋರೇಶನ್ ಮಾದರಿ ಕಟ್ಟಡಗಳ ಉಪವಿಧಿಗಳು 2017ರನ್ವಯ 100 ಚದುರ ಮೀಟರ್ ಮೇಲ್ಪಟ್ಟ ಎಲ್ಲಾ ಕಟ್ಟಡ ನಿರ್ಮಾಣದ ಅನುಮತಿಗೆ ಮಳೆ ನೀರು ಕೊಯ್ಲು ಕಡ್ಡಾಯಗೊಳಿಸಲಾಗಿರುತ್ತದೆ ಹಾಗು ನಗರ ಪಟ್ಟಣಗಳ ವ್ಯಾಪ್ತಿಯಲ್ಲಿರುವ ಸರ್ಕಾರಿ ಕಛೇರಿಗಳು, ಶಿಕ್ಷಣ ಸಂಸ್ಥೆಗಳಲ್ಲಿ, ಸಮುದಾಯ ಭವನಗಳಲ್ಲಿ ಮಳೆ ನೀರನ್ನು ಸಂಗ್ರಹಿಸಲಾಗುತ್ತಿದೆ. ನಗರಗಳ / ಪಟ್ಟಣಗಳ ವ್ಯಾಪ್ತಿಯಲ್ಲಿ ಮನೆಗಳ ಮೇಲೆ ಬೀಳುವ ಮಳೆ ನೀರನ್ನು ಸಂಗ್ರಹಿಸಿ, ಬಳಸಲು ಮಾಹಿತಿ, ಶಿಕ್ಷಣ, ಸಂವಹನ (ಐ.ಇ.ಸಿ.) ಚಟುವಟಿಕೆಗಳನ್ನು ಕೈಗೊಳ್ಳಲಾಗಿದೆ.<br><br>ಕೇಂದ್ರ ಜಲಶಕ್ತಿ ಸಚಿವಾಲಯದಿಂದ ಜಲಶಕ್ತಿ ಅಭಿಯಾನವನ್ನು ಜುಲೈ 2019 ರಿಂದ ಜಾರಿಗೆ ತಂದಿದ್ದು, ನಗರ ಸ್ಥಳೀಯ ಸಂಸ್ಥೆಗಳ ಹಂತದಲ್ಲಿ ಜಲಶಕ್ತಿ ಅಭಿಯಾನವನ್ನು ಹಮ್ಮಿಕೊಳ್ಳಲಾಗಿದೆ. ಜಲಶಕ್ತಿ ಅಭಿಯಾನದಡಿ ಮಳೆ ನೀರು ಕೊಯ್ಲು ಒಂದು ಭಾಗವಾಗಿರುತ್ತದೆ.<br><br>ಕೇಂದ್ರ ಸರ್ಕಾರದ ಜಲಶಕ್ತಿ ಅಭಿಯಾನದಡಿ ಸಂಗ್ರಹವಾಗುವ ಮಳೆ ನೀರಿನ ಪ್ರಸ್ತುತ ಪ್ರಮಾಣವನ್ನು ಹೆಚ್ಚಿಸಲು ಮತ್ತು ನಗರಗಳ ವ್ಯಾಪ್ತಿಯಲ್ಲಿರುವ ಅಂತರ್ಜಲವನ್ನು |

. . .6/--

| | | |
|---|---|---|
| | | ಹೆಚ್ಚಿಸಲು ನೀರಿನ ಮೂಲಗಳಾದ ಕೆರೆಗಳ ಹೂಳೆತ್ತುವ ಕಾರ್ಯ ಕೈಗೊಂಡು ಮಳೆ ನೀರನ್ನು ಸಂಗ್ರಹಿಸಲಾಗುತ್ತಿದೆ. ಇದರಿಂದ ಅಂತರ್ಜಲದ ಮಟ್ಟ ಹೆಚ್ಚಾಗುತ್ತದೆ ಹಾಗು ಜಲಶಕ್ತಿ ಅಭಿಯಾನದಡಿ ನೀರು ಸಂರಕ್ಷಣೆಯ ಕಾರ್ಯಗಳನ್ನು ಬರಪೀಡಿತ ಪ್ರದೇಶಗಳೆಂದು ಘೋಷಿಸಿರುವ 56 ನಗರಗಳಲ್ಲಿ ಅನುಷ್ಠಾನಗೊಳಿಸಲು ಕಡ್ಡಾಯಗೊಳಿಸಲಾಗಿದೆ ಹಾಗು ಯೋಜನೆಯನ್ನು ಎಲ್ಲಾ ನಗರಗಳಿಗೂ ವಿಸ್ತರಿಸಲಾಗಿದೆ.<br>ಜಲಶಕ್ತಿ ಅಭಿಯಾನದಡಿ ಇನ್ನು ಮುಂದೆ ನಿರ್ಮಾಣವಾಗುವ ಎಲ್ಲಾ ಹೊಸ ಕಟ್ಟಡಗಳಲ್ಲಿ ಮಳೆ ನೀರು ಕೊಯ್ಲು ಕಡ್ಡಾಯಗೊಳಿಸಲು ಸರ್ಕಾರದ ಸುತ್ತೋಲೆ ಸಂಖ್ಯೆ: ನಅಇ 200 ಸಿಎಸ್ಎಸ್ 2019, ದಿನಾಂಕ: 22-07-2019 ರಲ್ಲಿ ನಿರ್ದೇಶಿಸಲಾಗಿದೆ. ಜಲಶಕ್ತಿ ಅಭಿಯಾನದ ಅನುಷ್ಠಾನದಡಿ ಕೈಗೊಳ್ಳುವ ಮಳೆ ನೀರು ಕೊಯ್ಲು ಕಾಮಗಾರಿಗಳಿಗೆ ತಗಲುವ ವೆಚ್ಚವನ್ನು ಕೇಂದ್ರ ಹಣಕಾಸು ಆಯೋಗದ ಅನುದಾನ, ರಾಜ್ಯ ಹಣಕಾಸು ಆಯೋಗ (ಮುಕ್ತನಿಧಿ) ಅನುದಾನ, ಸ್ಥಳೀಯ ಸಂಸ್ಥೆಗಳ ಸಾಮಾನ್ಯ ನಿಧಿಯಿಂದ ಭರಿಸಲು ಸೂಚಿಸಲಾಗಿದೆ.<br>ನೀರಿನ ಸಂರಕ್ಷಣೆಯ ಕುರಿತು ಸಾರ್ವಜನಿಕ ಜಾಗೃತಿ ಮೂಡಿಸಲು ವಿವಿಧ ಐ.ಇ.ಸಿ. ಚಟುವಟಿಕೆಗಳನ್ನು ಕೈಗೊಳ್ಳಲಾಗಿದೆ.<br>15ನೇ ಹಣಕಾಸು ಆಯೋಗದ ಅನುದಾನದಡಿ ನಗರಗಳಿಗೆ ಹಂಚಿಕೆಯಾದ ಒಟ್ಟು ಶೇಕಡ 25ರಷ್ಟು ಅನುದಾನವನ್ನು ಕುಡಿಯುವ ನೀರಿನ ಕಾಮಗಾರಿಗಳಿಗೆ ಬಳಸಲು ನಿರ್ಬಂಧಿಸಲಾಗಿದ್ದು, ಸದರಿ ಅನುದಾನದ ಕನಿಷ್ಠ ಶೇ.5 ರಷ್ಟನ್ನು ಕಡ್ಡಾಯವಾಗಿ ಮಳೆ ನೀರು ಕೊಯ್ಲಿಗೆ ಸಂಬಂಧಿಸಿದ ಕಾಮಗಾರಿಗಳನ್ನು ಕೈಗೊಳ್ಳಲು ಸರ್ಕಾರದ ಸುತ್ತೋಲೆ ಸಂಖ್ಯೆ: ನಅಇ 177 ಎಸ್ಎಫ್ಸಿ 2020, ದಿನಾಂಕ 29-06-2020ರಲ್ಲಿ ಮಾರ್ಗಸೂಚಿಯನ್ನು ಹೊರಡಿಸಿ ನಿರ್ದೇಶಿಸಲಾಗಿದೆ. |

ಸಂಖ್ಯೆ: ನಅಇ 187 ಎಂಎನ್‌ವೈ 2020

ಬಿ.ಎಸ್. ಯಡಿಯೂರಪ್ಪ

(ಬಿ.ಎಸ್. ಯಡಿಯೂರಪ್ಪ)

ಮುಖ್ಯಮಂತ್ರಿ